## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 185(307)
ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 17/02/2022.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶಿಕ್ಷಕ/ಸಿಬ್ಬಂದಿಗಳಿಗೆ ಯಾವುದೇ ಪಿಂಚಣಿ ಸೌಲಭ್ಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ದಿನಾಂಕ:01.04.2006ರ ಪೂರ್ವದಲ್ಲಿ ವೇತನಾನುದಾನಕ್ಕೊಳಪಟ್ಟ ಶಿಕ್ಷಕರು/ಸಿಬ್ಬಂದಿಗಳಿಗೆ ಪಿಂಚಣಿ ಸೌಲಭ್ಯವಿರುತ್ತದೆ.<br>ದಿನಾಂಕ:01.04.2006ರ ನಂತರ ವೇತನಾನುದಾನಕ್ಕೊಳಪಟ್ಟ ಶಿಕ್ಷಕರು/ಸಿಬ್ಬಂದಿಗಳು ನೂತನ ಪಿಂಚಣಿ ಯೋಜನೆಯ ವ್ಯಾಪ್ತಿಗೆ ಒಳಪಡುತ್ತಾರೆ. |
| ಆ) | ಬಂದಿದ್ದಲ್ಲಿ, ಸಿಬ್ಬಂದಿಗಳಿಗೆ ಪಿಂಚಣಿ ಒದಗಿಸುವಂತೆ ಅನೇಕ ಹೋರಾಟಗಳನ್ನು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಪಿಂಚಣಿ ಒದಗಿಸುವ ಪ್ರಸ್ತಾವನೆಯು ಸರ್ಕಾರದ ಮುಂದೆ ಇದೆಯೇ; | ದಿನಾಂಕ:01.04.2006 ರ ಪಿಂಚಣಿ ನೀತಿಯಲ್ಲಿ ಸರ್ಕಾರಿ ಅನುದಾನಿತ ಶಾಲೆಗಳ ನೌಕರರಿಗೆ ಪಿಂಚಣಿ ಒದಗಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ: FD (SPL)04 PET 2005, ದಿನಾಂಕ: 31.03.2006ರ ಕ್ರಮ ಸಂಖ್ಯೆ: 08ರಲ್ಲಿ ಈ ಕೆಳಗಿನಂತೆ ಆದೇಶಿಸಿದೆ.<br>The Defined Benefit Pension to the employees of Grant-in-Aid educational institutions shall be discontinued to the recruits joining on or after 01.04.2006. The New Defined Contributory Pension Scheme shall be applicable to them on optional basis to the employee & the employer and the option shall be exercised by both. However, the employer's contribution shall be met by the respective institutions and not by the State Government.<br>• ಈ ಆದೇಶವು ದಿನಾಂಕ: 01/04/2006ರಿಂದ ಜಾರಿಗೆ ಬಂದಿರುತ್ತದೆ.<br>• ದಿನಾಂಕ: 01/04/2006ರ ನಂತರ |
| ಇ) | ಈ ಸಿಬ್ಬಂದಿ ವರ್ಗಕ್ಕೆ ನೂತನ ಪಿಂಚಣಿ ವ್ಯವಸ್ಥೆಯನ್ನು ಜಾರಿಗೆ ತರಲು ಇರುವ ಸಮಸ್ಯೆಯೇನು; | |
| ಈ) | ಇವರ ಸಮಸ್ಯೆಗಳನ್ನು ಪರಿಹರಿಸಿ ಸರ್ಕಾರವು ಈ ನೌಕರರನ್ನು ಪಿಂಚಣಿ ವ್ಯವಸ್ಥೆಯಡಿ ತರುವುದೇ? (ವಿವರ ನೀಡುವುದು) | |

| | | |
|---|---|---|
| | | ಅನುದಾನಸಹಿತ ಅನುಮೋದನೆಗೊಂಡ ಅನುದಾನಿತ ಖಾಸಗಿ ಶಾಲೆ/ ಕಾಲೇಜುಗಳಲ್ಲಿನ ಸಿಬ್ಬಂದಿಗಳಿಗೆ ಈ ಮೇಲಿನ ನಿಯಮ ಅನ್ವಯವಾಗುತ್ತದೆ.<br>• ಅನುದಾನಿತ ಸಿಬ್ಬಂದಿಗಳ ಸೇವಾ ಸೌಲಭ್ಯಗಳು ಅನುದಾನಸಹಿತವಾಗಿ ಅನುಮೋದನೆಗೊಂಡ ದಿನಾಂಕದಿಂದ ಅನ್ವಯವಾಗುತ್ತದೆ. ಆದುದರಿಂದ 2006 ರ ಪೂರ್ವದಲ್ಲಿ ಅನುದಾನರಹಿತವಾಗಿ ನೇಮಕಗೊಂಡ ಸಿಬ್ಬಂದಿಗಳು ದಿನಾಂಕ: 01/04/2006ರ ನಂತರ ಅನುದಾನಕ್ಕೆ ಒಳಪಟ್ಟಲ್ಲಿ ಅಂತಹ ಸಿಬ್ಬಂದಿಗಳು ಹೊಸ ಪಿಂಚಣಿ ಯೋಜನೆ (NPS) ವ್ಯಾಪ್ತಿಗೆ ಒಳಪಡುತ್ತಾರೆ.<br>• ಮೇಲೆ ತಿಳಿಸಿರುವ ಅಂಶಗಳಿಗೆ ಒಳಪಟ್ಟು ಅನುದಾನಿತ ಸಿಬ್ಬಂದಿಗಳು ಇಚ್ಛೆ ಪಟ್ಟಲ್ಲಿ NPS ಯೋಜನೆಗೆ ಒಳಪಡಿಸಬಹುದಾಗಿದೆ.<br>• ಈ ಪಿಂಚಣಿ ಯೋಜನೆಯು ಸಂಪೂರ್ಣವಾಗಿ ಸ್ವ-ಇಚ್ಛಾ (optional) ನೆಲೆಯಲ್ಲಿ ಜಾರಿಗೊಳಿಸುವುದರಿಂದ ಕಡ್ಡಾಯಗೊಳಿಸಲು ಅವಕಾಶವಿರುವುದಿಲ್ಲ.<br>• ದಿನಾಂಕ:01.04.2006ರ ನಂತರ ಅನುದಾನಿತ ಶಾಲೆಗಳಲ್ಲಿ ನೇಮಕಗೊಂಡ ನೌಕರರಿಗೆ ನೂತನ ಪಿಂಚಣಿ ಯೋಜನೆಯ ಭಾಗಾಂಶವನ್ನು ಶಾಲಾ ಆಡಳಿತ ಮಂಡಳಿಗಳು ಭರಿಸಬೇಕಾಗುತ್ತದೆ. |

ಸಂಖ್ಯೆ: ಇಪಿ 54 ಎಸ್‌ಇಎಸ್ 2022

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು